CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಆಗಸ್ಟ್ ೧೮, ೨೦೦೫ (ಶ್ರಾವಣ ೨೭, ಶಕ ವರ್ಷ ೧೯೨೭) | ಸಂಚಿಕೆ ೩೩ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್-16/ಎಫ್‌ಇ/2005, ದಿನಾಂಕ: 22ನೇ ಜುಲೈ 2005**

**ಅರ್ಜಿದಾರರು :**

1) ಶ್ರೀಮತಿ ಲಕ್ಷ್ಮೀ ಮರಶಾಲ್ತಿ, ದಿ: ಕೃಷ್ಣ ಮರಶಾಲರ ಪತ್ನಿ,
2) ಮೈನರ್ ನಾಗೇಶ್, 3) ಮೈನರ್ ಜ್ಯೋತಿ,
4) ಮೈನರ್ ಆಶಾ, 5) ಮೈನರ್ ಪ್ರವೀಣ್,
6) ಮೈನರ್ ಪ್ರಕಾಶ್, 7) ಮೈನರ್ ಪ್ರದೀಣ್
ವಾರಂಪಳ್ಳಿ ಸಾಲಿಗ್ರಾಮ, ಉಡುಪಿ

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ಗೋಪಾಲ ಖಾರ್ವಿ ಬಿನ್ ರಾಮ ಖಾರ್ವಿ
ಕೋಡಿ ಬೇಂಗ್ರೆ, ಕೋಡಿ ಕನ್ಯಾನ ವಯಾ ಹಂಗಾರ ಕಟ್ಟೆ, ಉಡುಪಿ
2) ಯುನೈಟೆಡ್ ಇನ್ಸೂರೆನ್ಸ್ ಕಂ. ಶಾಖೆ, ಕುಂದಾಪುರ.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಲಕ್ಷ್ಮೀ ಮರಶಾಲ್ತಿ ಇವರು ತಮ್ಮ ಗಂಡನಾದ ಶ್ರೀ ಕೃಷ್ಣ ಮರಶಾಲ ಇವರು ಪ್ರತಿವಾದಿಗಳಾದ ಶ್ರೀ ಗೋಪಾಲ ಖಾರ್ವಿ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 1.3.2004 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**
ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ,
ಉಡುಪಿ ಜಿಲ್ಲೆ ಉಡುಪಿ.

ಪಿ.ಆರ್.1063

### ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂಖ್ಯೆ: ಡಬ್ಲ್ಯೂಸಿಎ/ಎಫ್-18/2005**

**ಅರ್ಜಿದಾರರು :**

1) ಯಶೋಧ ಕೋಂ ಲೇಟ್ ಚನ್ನವೀರಪ್ಪ
2) ಹೆಚ್. ರಾಜು ಬಿನ್ ಹಲಗನಾಯ್ಕ
3) ಹೆಚ್. ಸ್ವಾಮಿ ಬಿನ್ ಹಲಗನಾಯ್ಕ
ಹುದಗೂರು ಹಳ್ಳಿ, ಕುಶಾಲನಗರ

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ಬಸಪ್ಪ,
ಕಾಫಿ ಪ್ಲಾಂಟರ್, ಪನ್ನಿಯ ಎಸ್ಟೇಟ್, ಸುರಿರಿಕೊಪ್ಪ,
ಸೋಮವಾರಪೇಟೆ ತಾಲ್ಲೂಕು, ಕೊಡಗು ಜಿಲ್ಲೆ.
2) ದಿ ಡಿವಿಜನಲ್ ಮ್ಯಾನೇಜರ್,
ದಿ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ಡಿವಿಜನಲ್ ಆಫೀಸ್, ಜಯದೇವ ಕಾಂಪ್ಲೆಕ್ಸ್, ಬಿ.ಹೆಚ್. ರಸ್ತೆ, ತುಮಕೂರು.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಹಲಗನಾಯ್ಕ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 10.04.2004 ರಂದು ಸಾವನ್ನಪ್ಪಿರುತ್ತಾರೆಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವರ ಅವಲಂಬಿತರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರು/ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೆ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಎನ್. ರಾಮಕೃಷ್ಣ**

ಪಿ.ಆರ್.1064 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪ ವಿಭಾಗ, ಹಾಸನ

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ

**ಸಂಖ್ಯೆ: ಡಬ್ಲ್ಯೂಸಿಎ:ಎಫ್:ಸಿಆರ್-24:2005**

**ಅರ್ಜಿದಾರರು :** 1) ಅಪ್ಪು ಬಿನ್ ಕಂರಮೇಸ್ತ್ರಿ 2) ಶ್ರೀಮತಿ ಗೋಪಿ ಕೋಂ ಅಪ್ಪು 3) ಬ್ಯಾದನೇಗ್ರಾಮ ಸುಂಡೇಕೆರೆ ಅಂಚೆ, ಅರೇಹಳ್ಳಿ ಹೋಬಳಿ, ಬೇಲೂರು ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:** ಮೆ: ದಿವಾನ್ ಎಸ್ಟೇಟ್, ಹೊಸಕೆರೆ ಬಾಳ್ಳುಪೇಟೆ ಗ್ರಾಮ ಮತ್ತು ಅಂಚೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಆನಂದ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 14.09.2004 ರಂದು ಸಾವನ್ನಪ್ಪಿರುತ್ತಾರೆಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವರ ಅವಲಂಬಿತರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರು/ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೆ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಎನ್. ರಾಮಕೃಷ್ಣ**

ಪಿ.ಆರ್.1065 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಜಿಲ್ಲೆ, ಹಾಸನ

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಮತ್ತು ಕಾರ್ಮಿಕ ಅಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ಪ್ರಕರಣ ಸಂಖ್ಯೆ: ಕಾಪಕ:ಸಿಆರ್-37:2005, ದಿನಾಂಕ: 26ನೇ ಜುಲೈ 2005**

**ಅರ್ಜಿದಾರರು :** 1) ಕೆಂಪಮ್ಮ ಕೋಂ ದುಂಡ್ಯಪ್ಪ 2) ಮೀನಾಕ್ಷಿ ಕೋಂ ದಿ: ವೆಂಕಟೇಶ್ 3) ವಿನೋದ ಬಿನ್ ದಿ: ವೆಂಕಟೇಶ್ **ಇವರುಗಳ ವಿಳಾಸ:** ಚನ್ನಗಿರಿ ರಸ್ತೆ, ಹೊಳೆಹೊನ್ನೂರು, ಭದ್ರಾವತಿ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು:** 1) ಕೆ. ಮಹಾದೇವಿ ಬಿನ್ ನಿಂಗರಾಜು, ಬಸ್ ಮಾಲೀಕರು, ಟೆಂಪೊಟ್ರ್ಯಾಕ್ಸ್, 4ನೇ ತಿರುವು, ಗಾರ್ಡನ್ ಏರಿಯಾ, ಶಿವಮೊಗ್ಗ. 2) ಯುನೈಟೆಡ್ ಇನ್ಸೂರೆನ್ಸ್ ಕಂ. ಲಿ., ರಬ್ ಬಿಲ್ಡಿಂಗ್ ಎ ಎ ಸರ್ಕಲ್, ಬಿ.ಹೆಚ್. ರಸ್ತೆ, ಶಿವಮೊಗ್ಗ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ದಿ: ವೆಂಕಟೇಶ್ ರವರು ಪ್ರತಿವಾದಿಯವರಲ್ಲಿ ಚಾಲಕರಾಗಿ ಕೆಲಸದ ಮೇಲೆ ಇದ್ದಾಗ 26.04.2005 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 8.7.2005 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ, ಅಥವಾ ಅರ್ಜಿಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ಹೆಚ್.ಕೆ. ಷಣ್ಮುಖಪ್ಪ**

ಪಿ.ಆರ್.1066 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ಸಂಖ್ಯೆ: ಎಲ್.ಎನ್.ಡಿ.(ಎನ್):ಸಿಆರ್:146/2002-03, ದಿನಾಂಕ: 21ನೇ ಜುಲೈ 2005**

**ವಿಷಯ :** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ದೊಡ್ಡಬಿದರಕಲ್ಲು ಗ್ರಾಮದ ಸ.ನಂ.75 ರಲ್ಲಿ 25-00 ಎಕರೆ ಜಮೀನನ್ನು ನಗರ ಸ್ಥಳೀಯ ಸಂಸ್ಥೆಗಳ ಘನ ತ್ಯಾಜ್ಯ ವಸ್ತುಗಳ ವಿಲೇವಾರಿಗೆ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ :**
1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ:204ಎಲ್.ಜಿಕ್ಯೂ:05, ದಿನಾಂಕ: 23.3.2005.
2) ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಭಿವೃದ್ಧಿ ಕೋಶ, ಬೆಂಗಳೂರು ರವರ ಪತ್ರದ ಸಂ:ಯೋನಿ:ಬೆಂನಕೋ: ಎಸಿಎಂ:ಸಿಆರ್:94/04-05, ದಿನಾಂಕ: 17.11.2004.
3) ಆಯುಕ್ತರು, ದಾಸನಹಳ್ಳಿ ನಗರಸಭೆ ರವರ ಪತ್ರದ ಸಂಖ್ಯೆ: ಅಶಾ:10/02-03, ದಿನಾಂಕ: 25.11.2002.
4) ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ರವರ ಪತ್ರದ ಸಂಖ್ಯೆ: ಎಲ್.ಎನ್.ಡಿ:ಸಿಆರ್:1/ 2005-06, ದಿನಾಂಕ: 8.7.2005.

ವಿಷಯಕ್ಕೆ ಸಂಬಂಧಿಸಿದಂತೆ, ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ದೊಡ್ಡಬಿದರಕಲ್ಲು ಗ್ರಾಮದ ಸರ್ವೆ ನಂ.75 ರಲ್ಲಿ 25-00 ಎಕರೆ ಸರ್ಕಾರಿ ಗೋಮಾಳ ಜಮೀನನ್ನು ನಗರ ಸ್ಥಳೀಯ ಸಂಸ್ಥೆಗಳಿಗೆ ಸರ್ವೋಚ ನ್ಯಾಯಾಲಯದ ತೀರ್ಪಿನ ಹಿನ್ನೆಲೆಯಲ್ಲಿ ಸರ್ಕಾರಿ ಜಮೀನನ್ನು ಒದಗಿಸಲು ಅನಿವಾರ್ಯತೆ ಉಂಟಾಗಿರುವುದರಿಂದ ಉಲ್ಲೇಖ (1)ರ ಸರ್ಕಾರದ ಪತ್ರದ ನಿರ್ದೇಶನದಂತೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿ ನಿರ್ಧಿಷ್ಟ ಉದ್ದೇಶಕ್ಕಾಗಿ ಸರ್ಕಾರಿ ಜಮೀನನ್ನು ಕಾಯ್ದಿರಿಸಲು ಜಿಲ್ಲಾಧಿಕಾರಿಗಳಿಗೆ ಅಧಿಕಾರವಿರುವುದನ್ನು ಬಳಸಿ ಸದರಿ ಜಾಗವನ್ನು ಸಂಬಂಧಿಸಿದ ಸ್ಥಳೀಯ ಸಂಸ್ಥೆಗಳಿಗೆ ವರ್ಗಾಯಿಸುವಂತೆ ಸರ್ಕಾರದ ಪೂರ್ವಾನುಮತಿ ನೀಡಲಾಗಿದೆ.

ಆದ್ದರಿಂದ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ದೊಡ್ಡಬಿದರಕಲ್ಲು ಗ್ರಾಮದ ಸರ್ವೆ ನಂ.75 ರಲ್ಲಿ 25-00 ಎಕರೆ ಸರ್ಕಾರಿ ಗೋಮಾಳ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿ ಘನ ತ್ಯಾಜ್ಯ ವಸ್ತುಗಳ ವಿಲೇವಾರಿಗೆ ಮತ್ತು ಶೇಖರಣೆಗೆ ಕಾಯ್ದಿರಿಸಲಾಗಿದೆ.

**ಷರತ್ತುಗಳು**

1) ನಗರ ಸಭೆ, ದಾಸರಹಳ್ಳಿ ರವರಿಗೆ ಜಮೀನಿನ ಮೇಲೆ ಯಾವುದೇ ಹಕ್ಕು ಇರುವುದಿಲ್ಲ.
2) ಸದರಿ ಜಮೀನಿನ ಉಸ್ತುವಾರಿಯನ್ನು ತಹಶೀಲ್ದಾರರ ಮೇಲ್ವಿಚಾರಣೆಯಲ್ಲಿ ನಿರ್ವಹಿಸತಕ್ಕದ್ದು.

ಪಿ.ಆರ್. 1067 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಪ್ರಧಾನ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಯವರ ನ್ಯಾಯಾಲಯ, ಶಿಡ್ಲಘಟ್ಟ

### ಪ್ರಕಟಣೆ

**ನಿಯಮ 457(2) ದಂಡ ಪ್ರಕ್ರಿಯಾ ಸಂಹಿತೆ, ದಿನಾಂಕ: 22ನೇ ಜುಲೈ 2005**

ಶಿಡ್ಲಘಟ್ಟ ಪುರ ಠಾಣೆ ಪೊಲೀಸರ ಮೊಕದ್ದಮೆ ಸಂಖ್ಯೆ: ಸಿಸಿ 171/01, ಪಿ.ಎಫ್. ಸಂಖ್ಯೆ:30/01 ದಿನಾಂಕ: 20.6.2001, ಪಿ.ಆರ್. ಸಂಖ್ಯೆ:12/05 ರಲ್ಲಿ ಪೊಲೀಸರು ವಶಪಡಿಸಿಕೊಂಡ ಸ್ವತ್ತಿಗೆ ವಾರಸುದಾರರು ಇಲ್ಲದೆ ವಿಲೇವಾರಿಯಾಗದೆ ಉಳಿದಿದೆ. ಆದ್ದರಿಂದ ಈ ಪ್ರಕಟಣೆಯ ಎರಡು (2) ತಿಂಗಳ ಒಳಗಾಗಿ ಸದರಿ ಸ್ವತ್ತಿಗೆ ಸಂಬಂಧಪಟ್ಟವರು ಯಾರಾದರೂ ಇದ್ದಲ್ಲಿ ತಮ್ಮ ಹಕ್ಕನ್ನು ಪ್ರತಿಪಾದಿಸಿ ಈ ನ್ಯಾಯಾಲಯದಿಂದ ಪಡೆದುಕೊಳ್ಳುವುದು, ತಪ್ಪಿದಲ್ಲಿ ವಾರಸುದಾರರು ಯಾರೂ ಇಲ್ಲವೆಂದು ಪರಿಗಣಿಸಿ ಸ್ವತ್ತನ್ನು ಕಾನೂನು ಪ್ರಕಾರ ವಿಲೇವಾರಿ ಮಾಡಲಾಗುವುದು.

| ಮೊಕದ್ದಮೆ ಸಂಖ್ಯೆ | ಪಿ.ಎಫ್. ಸಂಖ್ಯೆ | ಪಿ.ಆರ್. ಸಂಖ್ಯೆ | ಸ್ವತ್ತಿನ ವಿವರ |
|---|---|---|---|
| ಸಿಸಿ 171/01 | 30/01 | 12/05 | ಒಂದು ಸುಜುಕಿ ಮೋಟಾರ್ ಸೈಕಲ್ ಸಂಖ್ಯೆ:ಕೆ.ಎ.05-ಇ-8283 ಅದರ ಇಂಜಿನ್ ಸಂಖ್ಯೆ:7610 ಎಂ747600 ಹಾಗೂ ಚಾಸನಂ. 7610102665 ಆಗಿರುತ್ತೆ. |

**ಡಿ.ಟಿ. ದೇವೇಂದ್ರನ್**

ಪಿ.ಆರ್. 1068 ಪ್ರಧಾನ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಪ್ರ.ದ.ನ್ಯಾ.ದಂ., ಶಿಡ್ಲಘಟ್ಟ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಅಧಿಕೃತ ಜ್ಞಾಪನ

**ಸಂಖ್ಯೆಃ ಸಿಆಸುಇ 44 ಡಿಬಿಎಂ 2005, ಬೆಂಗಳೂರು, ದಿನಾಂಕಃ 7ನೇ ಜುಲೈ 2005**

**ವಿಷಯ :** ಬಹು ಮಹಡಿ ಕಟ್ಟಡದ ಮುಂದಿನ ರಸ್ತೆಯಲ್ಲಿ ವಾಹನಗಳ ದಟ್ಟಣೆಯನ್ನು ನಿಯಂತ್ರಿಸುವ ಬಗ್ಗೆ

ಹೊಸ ವಿಕಾಸಸೌಧ ಕಟ್ಟಡದ ನಿರ್ಮಾಣ ಕಾರ್ಯ ಪ್ರಾರಂಭಿಸಿದ ಮೇಲೆ ಬಸವೇಶ್ವರ ವೃತ್ತದಿಂದ ಗೋಪಾಲಗೌಡ ಚೌಕದವರೆಗೆ ಇದ್ದ ರಸ್ತೆಯನ್ನು, ದೇವರಾಜ ಅರಸು ಪ್ರತಿಮೆ ಬಳಿ ಇರುವ ವೃತ್ತದಿಂದ ಗೋಪಾಲಗೌಡ ವೃತ್ತದವರೆಗೆ ಮುಚ್ಚಲಾಗಿದ್ದು, ತತ್ಪರಿಣಾಮವಾಗಿ ಅಸಂಖ್ಯಾತ ವಾಹನಗಳು ಅಂಬೇಡ್ಕರ್ ರಸ್ತೆಯಿಂದ ದೇವರಾಜ ಅರಸು ರಸ್ತೆ ಹಾಗೂ ದೇವರಾಜ ಅರಸು ರಸ್ತೆಯಿಂದ ಡಾಃಅಂಬೇಡ್ಕರ್ ರಸ್ತೆಗೆ ಬಹು ಮಹಡಿ ಕಟ್ಟಡದ ಮುಂದಿನ ರಸ್ತೆಯಿಂದ ಹೋಗಿ ಬರುತ್ತಿದ್ದು, ಆ ರಸ್ತೆಯಲ್ಲಿ ಸಂಚಾರ ವ್ಯವಸ್ಥೆ ಏರುಪೇರಾಗಿದ್ದು, ಬಹುಮಹಡಿ ಕಟ್ಟಡದ ಆವರಣದಲ್ಲಿರುವ ಕಚೇರಿಗಳಲ್ಲಿ ಕೆಲಸ ಮಾಡುತ್ತಿರುವ ಅಧಿಕಾರಿ / ಸಿಬ್ಬಂದಿ ವರ್ಗದವರಿಗೆ ಮತ್ತು ಅಲ್ಲಿ ಬರುವ ಗಣ್ಯರಿಗೆ ವಿಪರೀತ ವಾಹನ ದಟ್ಟಣೆಯಿಂದ ತೊಂದರೆಯಾಗುತ್ತಿದೆ. ಇಲ್ಲಿ ಅನಿಯಮಿತ ಸಂಖ್ಯೆಯ ವಾಹನಗಳ ಸಂಚಾರವನ್ನು ನಿಯಂತ್ರಿಸಲು ಕ್ರಮ ತೆಗೆದುಕೊಳ್ಳಬೇಕೆಂದು ಬಹಳಷ್ಟು ಮೂಲಗಳಿಂದ ದೂರುಗಳು ಬರುತ್ತಿರುವ ಹಿನ್ನೆಲೆಯಲ್ಲಿ ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, ಇವರು ಒಂದು ಸಭೆಯನ್ನು ಕರೆದಿದ್ದು, ಬಹು ಮಹಡಿ ಕಟ್ಟಡದ ಆವರಣವು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ವ್ಯಾಪ್ತಿಗೆ ಬರುವುದರಿದ, ಈ ಸಂಬಂಧ ಮುಂದಿನ ಕ್ರಮವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ತೆಗೆದುಕೊಳ್ಳಬೇಕೆಂದು ತಿಳಿಸಿರುತ್ತಾರೆ. ತತ್ಪರಿಣಾಮವಾಗಿ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,

ಇವರ ಅಧ್ಯಕ್ಷತೆಯಲ್ಲಿ ದಿನಾಂಕಃ 25-2-2005ರಂದು ಸಭೆಯೊಂದನ್ನು ನಡೆಸಲಾಗಿದ್ದು, ಬಹು ಮಹಡಿ ಕಟ್ಟಡದ ಹಿಂದುಗಡೆಯಿರುವ ಗ್ಯಾರೇಜ್‌ಗಳ ಮಧ್ಯೆಯಿರುವ ಗೋಡೆಗಳನ್ನು ಒಡೆದು ಹಾಕಿ ಹೆಚ್ಚಿನ ಸಂಖ್ಯೆಯ ವಾಹನಗಳ ಸಂಚಾರಕ್ಕೆ ಅನುವು ಮಾಡಿಕೊಡಬೇಕೆಂದು ಹಾಗೂ ಎಲ್ಲಾ ಸರ್ಕಾರಿ ವಾಹನಗಳ ಚಾಲಕರಿಗೆ ಸೂಚನೆಗಳನ್ನು ನೀಡಿ, ಅವರ ವಾಹನಗಳನ್ನು ಬಹು ಮಹಡಿ ಕಟ್ಟಡದ ಹಿಂದುಗಡೆ ನಿಲ್ಲಿಸಬೇಕೆಂದು ತೀರ್ಮಾನಿಸಲಾಯಿತು. ಅದೇ ರೀತಿ ಖಾಸಗಿ ವಾಹನಗಳಿಗೆ ದೇವರಾಜ ಅರಸು ಪ್ರತಿಮೆಯ ಬಳಿಯಿರುವ ಮುಕ್ತ ಪ್ರದೇಶದಲ್ಲಿ ನಿಲುಗಡೆಗೆ ವ್ಯವಸ್ಥೆ ಮಾಡಬೇಕೆಂದು ಹಾಗೂ ಡಾಃ ಅಂಬೇಡ್ಕರ್ ರಸ್ತೆಯಿಂದ ದೇವರಾಜ ಅರಸು ರಸ್ತೆಯವರೆಗೆ ಹಾಗೂ ದೇವರಾಜ ಅರಸು ರಸ್ತೆಯಿಂದ ಡಾಃ ಅಂಬೇಡ್ಕರ್ ರಸ್ತೆಗೆ ಹೋಗುವ ರಸ್ತೆಯ ಆವರಣದಲ್ಲಿ ಸಂಚಾರ ನಿರ್ಬಂಧದ ಬಗ್ಗೆ ಸೂಕ್ತ ಫಲಕಗಳನ್ನು ಹಾಕಿ ಖಾಸಗಿ ವಾಹನಗಳ ಸಂಚಾರ ಮತ್ತು ನಿಲುಗಡೆಯನ್ನು ಬಹುಮಹಡಿ ಕಟ್ಟಡದಲ್ಲಿ ನಿಷೇಧಿಸಬೇಕೆಂದು ತೀರ್ಮಾನಿಸಲಾಯಿತು.

ತದನಂತರ, ಇದೇ ವಿಷಯಕ್ಕೆ ಸಂಬಂಧಿಸಿದಂತೆ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕಃ 3-5-2005ರಂದು ಉನ್ನತ ಮಟ್ಟದ ಸಭೆಯೊಂದನ್ನು ಕರೆದಿದ್ದು, ಬಹು ಮಹಡಿ ಕಟ್ಟಡದ ಮುಂದಿರುವ ರಸ್ತೆಯಲ್ಲಿ ವಾಹನಗಳ ಸಂಚಾರ ನಿಯಂತ್ರಿಸುವುದು ಹಾಗೂ ವಾಹನಗಳ ನಿಲುಗಡೆಗೆ ಸೂಕ್ತ ಪ್ರದೇಶವನ್ನು ಗುರುತಿಸುವುದು ಇತ್ಯಾದಿ ಸಮಸ್ಯೆಗಳನ್ನು ಅಭ್ಯಸಿಸಿ ಸೂಕ್ತ ಶಿಫಾರಸ್ಸುಗಳನ್ನು ಮಾಡುವ ಜವಾಬ್ದಾರಿಯನ್ನು ಪ್ರಧಾನ ಕಾರ್ಯದರ್ಶಿ (ಕೃಷಿ), ಕೃಷಿ ಮತ್ತು ತೋಟಗಾರಿಕೆ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಇರುವ ಉಪ ಸಮಿತಿಗೆ ಒಪ್ಪಿಸಲಾಯಿತು. ಉಪ ಸಮಿತಿಯು ತನ್ನ ಶಿಫಾರಸ್ಸುಗಳನ್ನು ಸಲ್ಲಿಸಿದೆ.

ಲೋಕೋಪಯೋಗಿ ಮತ್ತು ಇಂಧನ ಸಚಿವರು, ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಪ್ರಧಾನ ಕಾರ್ಯದರ್ಶಿ, ಸಿಆಸುಇ, ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ ಮತ್ತು ಮುಖ್ಯ ಅಭಿಯಂತರರು (ಸಂಪರ್ಕ ಮತ್ತು ಕಟ್ಟಡಗಳು), ಇವರು ದಿನಾಂಕಃ 1-6-2005ರಂದು ವಿಕಾಸಸೌಧ ಕಟ್ಟಡ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ವಾಹನ ಸಂಚಾರ ಸಮಸ್ಯೆ ಮತ್ತು ವಾಹನ ನಿಲುಗಡೆ ಪ್ರದೇಶ ಗುರುತಿಸುವ ಬಗ್ಗೆ ಪರಿವೀಕ್ಷಣೆ ಮಾಡಿದ್ದು, ಸದರಿ ಸಂದರ್ಭದಲ್ಲಿ ಕೆಲವು ತೀರ್ಮಾನಗಳನ್ನು ತೆಗೆದುಕೊಳ್ಳಲಾಯಿತು. ತದನಂತರ ದಿನಾಂಕಃ 13-6-2005ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿಯೂ ಈ ವಿಷಯದ ಬಗ್ಗೆ ಚರ್ಚಿಸಲಾಯಿತು. ಆ ನಂತರ, ಇದೇ ಸಂಬಂಧದಲ್ಲಿ ಪ್ರಧಾನ ಕಾರ್ಯದರ್ಶಿ, ಸಿಆಸುಇ ಮತ್ತು ನಗರ ಪೋಲೀಸ್ ಆಯುಕ್ತರು, ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಮುಖ್ಯ ಅಭಿಯಂತರರು (ಸಂಪರ್ಕ ಮತ್ತು ಕಟ್ಟಡಗಳು) ಮತ್ತು ಅಪರ ಪೋಲೀಸ್ ಆಯುಕ್ತರು (ಸಂಚಾರ), ಇವರುಗಳು ವಿಕಾಸಸೌಧ ಕಟ್ಟಡ ಮತ್ತು ಬಹು ಮಹಡಿ ಕಟ್ಟಡದ ಸುತ್ತಮುತ್ತಲಿನ ಪ್ರದೇಶದ ಪರಿವೀಕ್ಷಣೆ ಮಾಡಿ ವಾಹನ ದಟ್ಟಣೆ ಮತ್ತು ಭದ್ರತೆ, ಸಂಚಾರ ಹಾಗೂ ವಾಹನ ನಿಲುಗಡೆಗೆ ಸಂಬಂಧಪಟ್ಟಂತೆ ಕೆಲವು ಸಲಹೆಗಳನ್ನು ಮಾಡಿದ್ದಾರೆ.

ಈ ಎಲ್ಲಾ ಅಂಶಗಳನ್ನು ಗಮನಕ್ಕೆ ತೆಗೆದುಕೊಂಡು ಬಹು ಮಹಡಿ ಕಟ್ಟಡದ ಆವರಣದಲ್ಲಿ ವಾಹನ ದಟ್ಟಣೆಯನ್ನು ಸುಗಮಗೊಳಿಸಲು ಮತ್ತು ಸರ್ಕಾರಿ ಹಾಗೂ ಸಾರ್ವಜನಿಕ ವಾಹನಗಳ ನಿಲುಗಡೆಗೆ ಈ ಕೆಳಕಂಡಂತೆ ಕ್ರಮ ತೆಗೆದುಕೊಳ್ಳಲು ತೀರ್ಮಾನಿಸಲಾಗಿದೆ ಮತ್ತು ಅದರಂತೆ ಕ್ರಮ ಕೈಗೊಳ್ಳಲು ಸೂಚಿಸಿದೆಃ-

1) ಬಹು ಮಹಡಿ ಕಟ್ಟಡದ 4ನೇ ಹಂತ (ಟೌನ್ ಪ್ಲ್ಯಾನಿಂಗ್ ಕಟ್ಟಡ) ಮತ್ತು ಮಹಾಲೇಖಪಾಲರ ಕಟ್ಟಡ (ಹಿಂಭಾಗ)ದ ಮಧ್ಯೆ ಒಂದು ರ್‍ಯಾಂಪನ್ನು (ಇಳಿಜಾರು) ನಿರ್ಮಿಸಿ, ಬಹು ಮಹಡಿ ಕಟ್ಟಡದ ಹಿಂದೆ ಇರುವ ಎರಡು ಗ್ಯಾರೇಜುಗಳ ಷಟರ್‌ಗಳನ್ನು ತೆಗೆದು ರ್‍ಯಾಂಪ್‌ನಿಂದ ಇಳಿಯುವ ವಾಹನಗಳು ಬಹು ಮಹಡಿ ಕಟ್ಟಡದ 2ನೇ ಹಂತದ ಬಳಿ ಬಲಗಡೆಗೆ ತಿರುಗಿ ನಿರ್ಗಮಿಸಲು ಅವಕಾಶ ಮಾಡುವುದು.

   **(ಕ್ರಮ : ಲೋಕೋಪಯೋಗಿ ಇಲಾಖೆ)** **(ಕಾಲಮಿತಿ 30.9.2005)**

2) ನಿಗದಿತ ಸ್ಥಳದಲ್ಲಿ ನಿಲ್ಲಿಸಿರುವ ವಾಹನಗಳನ್ನು ಕರೆಯಲು ವಾಹನ ಕರೆಯುವ ಅನೌನ್ಸಿಂಗ್ ವ್ಯವಸ್ಥೆಯನ್ನು ಮಾಡುವುದು.

   **(ಕ್ರಮ : ಸಿ.ಆ.ಸು.ಇ.)** **(ಕಾಲಮಿತಿ 31.8.2005)**

3) ಬಹುಮಹಡಿ ಕಟ್ಟಡದ ಹಿಂಭಾಗದಲ್ಲಿರುವ ಗ್ಯಾರೇಜುಗಳ ಷಟರ್‌ಗಳನ್ನು ತೆಗೆದು ಅಲ್ಲಿ ವಾಹನಗಳ ಮುಕ್ತ ನಿಲುಗಡೆಗಾಗಿ ವ್ಯವಸ್ಥೆ ಮಾಡುವುದು.

   **(ಕ್ರಮಃ ಲೋಕೋಪಯೋಗಿ ಇಲಾಖೆ)** **(ಕಾಲಮಿತಿ 30.9.2005)**

4) ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಬಂದಿದ್ದ ಸಾರ್ವಜನಿಕ ಹಿತಾಸಕ್ತಿಗಳ ಅರ್ಜಿಯ ಮೇಲೆ ತೆಗೆದುಕೊಂಡಿರುವ ತೀರ್ಮಾನದಂತೆ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ಮತ್ತು ಸದರಿ ನ್ಯಾಯಾಲಯದಲ್ಲಿ ಕಾರ್ಯನಿರತ ವಕೀಲರ ವಾಹನಗಳನ್ನು ಬಹುಮಹಡಿ ಕಟ್ಟಡದ ಮುಂದಿನ ರಸ್ತೆಯಲ್ಲಿ ಹೋಗಲು ಅನುಮತಿಸುವುದು.

   **(ಕ್ರಮ : ಪೋಲೀಸ್ ಇಲಾಖೆ)**

5) ಪ್ರಸ್ತುತ ಡಾಃ ಅಂಬೇಡ್ಕರ್ ರಸ್ತೆಯಿಂದ ಬಹು ಮಹಡಿ ಕಟ್ಟಡಕ್ಕೆ ಇರುವ ಪ್ರವೇಶ ಪಡೆಯುವ ದ್ವಾರದ ಎಡ ಬದಿಯಲ್ಲಿರುವ ಒಂದು ವಾಹನ ಗ್ಯಾರೇಜನ್ನು ತೆಗೆದು ಹಾಕಿ ಪಾದಚಾರಿಗಳಿಗೆ ಪ್ರತ್ಯೇಕ ಪ್ರವೇಶಾವಕಾಶಕ್ಕೆ ಸ್ಥಳಾವಕಾಶ ಮಾಡಿ ಸಂಚಾರ ವ್ಯವಸ್ಥೆಯನ್ನು ಸುಗಮಗೊಳಿಸುವುದು.

   **(ಕ್ರಮ : ಲೋಕೋಪಯೋಗಿ ಇಲಾಖೆ)** **(ಕಾಲಮಿತಿ 30.9.2005)**

6) ಬಹು ಮಹಡಿ ಕಟ್ಟಡದ ಮುಂದಿರುವ ರಸ್ತೆಯಲ್ಲಿ ವಾಹನಗಳ ನಿಲುಗಡೆಯನ್ನು ಸಂಪೂರ್ಣವಾಗಿ ನಿಷೇಧಿಸುವುದು. ಅಧಿಕೃತ ಕಾರ್ಯಗಳ ನಿಮಿತ್ತ ಬರುವ ಸರ್ಕಾರಿ ಅಧಿಕಾರಿಗಳ ವಾಹನಗಳಿಗೆ ಬಹುಮಹಡಿ ಕಟ್ಟಡದ 3 ಮತ್ತು 4ನೇ ಹಂತದ ಮುಂದೆ ಇರುವ ಉದ್ಯಾನವನದ ಸುತ್ತಲು ಗುರುತಿಸಿರುವ ಸ್ಥಳದಲ್ಲಿ ಮಾತ್ರ ನಿಲುಗಡೆಗೆ ಅವಕಾಶ ಮಾಡಿಕೊಡುವುದು.

   **(ಕ್ರಮ : ಲೋಕೋಪಯೋಗಿ ಇಲಾಖೆ)**

7) ದೇವರಾಜ ಅರಸು ಪ್ರತಿಮೆ ಬಳಿಯಿರುವ ಉದ್ಯಾನವನದ ಬದಿಯಲ್ಲಿರುವ ಮುಕ್ತ ಪ್ರದೇಶದಲ್ಲಿ ಸಾರ್ವಜನಿಕ ವಾಹನಗಳ ನಿಲುಗಡೆಗೆ ಸೂಕ್ತವಾದ ತಾತ್ಕಾಲಿಕ ವ್ಯವಸ್ಥೆಯನ್ನು ಮಾಡುವುದು. ಈ ನಿಲುಗಡೆ ಪ್ರದೇಶದಲ್ಲಿ ವಾಹನಗಳ ಪ್ರವೇಶಕ್ಕೆ ಹಾಗೂ ನಿರ್ಗಮನಕ್ಕೆ ಪ್ರತ್ಯೇಕ ದ್ವಾರಗಳನ್ನು ನಿರ್ಮಿಸುವುದು.

   **(ಕ್ರಮ : ಲೋಕೋಪಯೋಗಿ ಇಲಾಖೆ)** **(ಕಾಲಮಿತಿ 30.9.2005)**

8) ವಿಕಾಸಸೌಧ ಕಟ್ಟಡದ ತಳ ಮಹಡಿ – 3ನ್ನು ವಿಕಾಸಸೌಧ ಕಟ್ಟಡದಲ್ಲಿ ಮತ್ತು ಬಹು ಮಹಡಿ ಕಟ್ಟಡದಲ್ಲಿ ಹಾಗೂ ವಿಧಾನಸೌಧದಲ್ಲಿ ಕರ್ತವ್ಯ ನಿರ್ವಹಿಸುವ ಅಧಿಕಾರಿ ಮತ್ತು ನೌಕರರ ಸ್ವಂತ ವಾಹನಗಳಿಗೆ ಮೀಸಲಾಗಿಡುವುದು. ತಳ ಮಹಡಿ – 2ನ್ನು ವಿಧಾನಸೌಧ, ವಿಕಾಸಸೌಧ

ಮತ್ತು ಬಹು ಮಹಡಿ ಕಟ್ಟಡದ ಸರ್ಕಾರಿ ವಾಹನಗಳ ನಿಲುಗಡೆಗೆ ಕಾದಿರಿಸುವುದು. ಮಾತ್ರವಲ್ಲ, ಇಲ್ಲಿ ಸರ್ಕಾರಿ ವಾಹನಗಳ ಚಾಲಕರಿಗೆ ಒಂದು ವಿಶ್ರಾಂತಿ ಕೊಠಡಿಯನ್ನು, ಕೆಲವು ಮೂಲ ಸೌಲಭ್ಯಗಳೊಂದಿಗೆ ಒದಗಿಸುವುದು. ತಳ ಮಹಡಿ - 1ರಲ್ಲಿ ತೋಟಗಾರಿಕೆ ಘಟಕ, ಸಿಆಸುಇ (ಕಾರ್ಯಕಾರಿ) ಕಚೇರಿಯ ಭದ್ರತಾ, ಸ್ವಚ್ಛತಾ ಸಿಬ್ಬಂದಿ, ಅಗ್ನಿಶಾಮಕ ಘಟಕ, ಸಾಮಾನ್ಯ ರವಾನೆ, ಮಲ್ಟಿಗ್ರಾಫ್, ಲೋಕೋಪಯೋಗಿ ಇಲಾಖೆಯ ವಿದ್ಯುತ್ ಮತ್ತು ಸಿವಿಲ್ ಉಪ ವಿಭಾಗ ಇತ್ಯಾದಿಗಳಿಗೆ ಸ್ಥಳಾವಕಾಶ ಒದಗಿಸುವುದು. ಇದಲ್ಲದೇ, ಸಚಿವರುಗಳ ವಾಹನ ನಿಲುಗಡೆಗೆ ಸ್ಥಳಾವಕಾಶ ಮೀಸಲಿಡುವುದು.

**(ಕ್ರಮ : ಲೋಕೋಪಯೋಗಿ ಇಲಾಖೆ)** **(ಕಾಲಮಿತಿ 30.9.2005)**

9) ವಿಧಾನಸೌಧ ಮತ್ತು ವಿಕಾಸಸೌಧವನ್ನು ಭದ್ರತಾ ದೃಷ್ಟಿಯಿಂದ ಒಂದೇ ಘಟಕವನ್ನಾಗಿ ಪರಿಗಣಿಸಿ, ಈ ಎರಡು ಘಟಕಗಳ ಸುತ್ತ ಕಬ್ಬಿಣದ ಗ್ರಿಲ್‌ಗಳನ್ನು ಅಳವಡಿಸಲಾಗುತ್ತಿದ್ದು, ಈ ಗ್ರಿಲ್‌ಗಳಿಗೆ ಈ ಕೆಳಗಿನ ಸ್ಥಳಗಳಲ್ಲಿ ದ್ವಾರಗಳನ್ನು ನಿರ್ಮಿಸುವುದು :-

| | |
|---|---|
| 01 | ನಿರ್ಮಿಸಲು ಉದ್ದೇಶಿಸಲಾಗಿರುವ ರ್‍ಯಾಂಪ್ ಬಳಿ |
| 02 | ದೇವರಾಜ ಅರಸು ಪ್ರತಿಮೆ ಬಳಿಯಿರುವ ಉದ್ಯಾನವನದ ಪಕ್ಕದಲ್ಲಿರುವ ಮುಕ್ತ ಪ್ರದೇಶವನ್ನು ಸಾರ್ವಜನಿಕ ವಾಹನಗಳ ನಿಲುಗಡೆಗೆ ಗುರುತಿಸಿದ್ದು, ಅಲ್ಲಿ ಒಂದು ಪ್ರವೇಶ ದ್ವಾರ ಹಾಗೂ ಮತ್ತೊಂದು ನಿರ್ಗಮನ ದ್ವಾರ ನಿರ್ಮಿಸುವುದು. |
| 03 | ವಿಕಾಸಸೌಧ ಕಟ್ಟಡದ ಪಶ್ಚಿಮ ದಿಕ್ಕಿನಲ್ಲಿ |
| 04 | ಬಹು ಮಹಡಿ ಕಟ್ಟಡದ 2ನೇ ಹಂತದ ಬಳಿ |
| 05 | ಬಹು ಮಹಡಿ ಕಟ್ಟಡದ 2ನೇ ಮತ್ತು 3ನೇ ಹಂತದ ಬಳಿ (ವಿದ್ಯುತ್ ಟ್ರಾನ್ಸ್‌ಫಾರ್ಮರ್‌ಗಳನ್ನು ದುರಸ್ಥಿಗೆ ಸಾಗಿಸಲು ಈ ದ್ವಾರ ಅಗತ್ಯವಿದೆ) |

**(ಕ್ರಮ : ಲೋಕೋಪಯೋಗಿ ಇಲಾಖೆ)** **(ಕಾಲಮಿತಿ 31.12.2005)**

10) ದೇವರಾಜ ಅರಸು ಪ್ರತಿಮೆ ಬಳಿ ಬಹು ಮಹಡಿ ಕಟ್ಟಡದ 5ನೇ ಹಂತದವರೆಗೆ ಮಾಡಿರುವ ಹೊಸ ಜೋಡಿ ರಸ್ತೆಯ ಬಳಿ BMTC ಬಸ್ ನಿಲುಗಡೆಗೆ "ಬೇ" ಗಳನ್ನು ನಿರ್ಮಿಸುವುದು.

**(ಕ್ರಮ : ಲೋಕೋಪಯೋಗಿ ಇಲಾಖೆ)**

11) ವಿಧಾನಸೌಧದ ಪಶ್ಚಿಮ ದಿಕ್ಕಿನಲ್ಲಿ ದೇವರಾಜ ಅರಸು ಪ್ರತಿಮೆಯ ಬಳಿ (ಶಾಸಕರ ಭವನದಿಂದ ಬರುವಾಗ ಎಡಬದಿಯ ಉದ್ಯಾನವನದೊಳಗೆ) ಒಂದು ಸ್ವಾಗತ ಕೇಂದ್ರ ಹಾಗೂ ವಿಧಾನಸೌಧ ಮತ್ತು ವಿಕಾಸಸೌಧದ ಮಧ್ಯೆಯಿರುವ ಗೋಪಾಲ ಗೌಡ ಚೌಕದ ಬಳಿ ನಿರ್ಮಿಸಿರುವ ಮಹಾದ್ವಾರದ ಬಳಿ ಒಂದು ಸ್ವಾಗತ ಕೇಂದ್ರವನ್ನು ನಿರ್ಮಿಸುವುದು.

**(ಕ್ರಮ : ಲೋಕೋಪಯೋಗಿ ಇಲಾಖೆ)** **(ಕಾಲಮಿತಿ 31.7.2005)**

12) ವಿಕಾಸಸೌಧ ಕಟ್ಟಡದ ಸ್ವಚ್ಛತೆ (House keeping) ಭದ್ರತೆ ಮತ್ತು ಲಿಫ್ಟ್ ಚಾಲನೆ ಸಂಬಂಧ ಅಲ್ಪಾವಧಿ ಟೆಂಡರ್‌ನ್ನು ಕರೆದು ಸೂಕ್ತ ವ್ಯವಸ್ಥೆ ಮಾಡುವುದು.

**(ಕ್ರಮ : ಸಿ.ಆ.ಸು.ಇ)** **(ಕಾಲಮಿತಿ 31.8.2005)**

13) ಕಾರ್ ಕಾಲಿಂಗ್ (ವಾಹನಗಳ ಅನೌನ್ಸಿಂಗ್) ವ್ಯವಸ್ಥೆಯನ್ನು ಮಾಡುವುದು.

**(ಕ್ರಮ : ಸಿ.ಆ.ಸು.ಇ.)** **(ಕಾಲಮಿತಿ** 31.7.2005)

14) ವಿಕಾಸಸೌಧ ಕಟ್ಟಡದಲ್ಲಿರುವ ಎಲ್ಲಾ ಕೊಠಡಿಗಳಲ್ಲಿರುವ ಪೀಠೋಪಕರಣ ಮತ್ತು ಇತರೆ ಸಾಮಾನುಗಳ ಪಟ್ಟಿಯನ್ನು ಸಿಆಸುಇ (ಕಾರ್ಯಕಾರಿ) ಗೆ ಒದಗಿಸುವುದು ಮತ್ತು ಆ ಕಟ್ಟಡದ ಎಲ್ಲಾ ಕೊಠಡಿಗಳಿಗೆ ಕೊಠಡಿ ಸಂಖ್ಯೆಗಳನ್ನು ನೀಡುವುದು (ಈ ಕೊಠಡಿ ಸಂಖ್ಯೆಯನ್ನು ಈಶಾನ್ಯ (north east) ದಿಕ್ಕಿನಿಂದ ಪ್ರಾರಂಭಿಸಲು ಸೂಚಿಸಲಾಗಿದೆ)

**(ಕ್ರಮ : ಲೋಕೋಪಯೋಗಿ ಇಲಾಖೆ)**

15) ಗುರುತಿನ ಚೀಟಿ ಮತ್ತು ವಾಹನ ಪಾಸ್‌ಗಳನ್ನು ನೀಡಲು ಕ್ರಮ ತೆಗೆದುಕೊಳ್ಳುವುದು

**(ಕ್ರಮ : ಸಿ.ಆ.ಸು.ಇ.)**

16) ಸ್ವಾಗತ ಕೇಂದ್ರಗಳಿಗೆ ಸಿಬ್ಬಂದಿಗಳನ್ನು ನೇಮಿಸುವುದು.

(ಕ್ರಮ ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ) ಮತ್ತು ಉಪ ಕಾರ್ಯದರ್ಶಿ, ಸಿಆಸುಇ (ಆಡಳಿತ))

**ಹೆಚ್.ಕೆ. ರವಿಮೂರ್ತಿ**

ಪಿ.ಆರ್. 1069

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1)

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಮತ್ತು ಕಾರ್ಮಿಕ ಅಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ಪ್ರಕರಣ ಸಂಖ್ಯೆ: ಕಾಪಕ:ಸಿಆರ್-35:2005, ದಿನಾಂಕ: 21ನೇ ಜುಲೈ 2005**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು:**

1) ಕು: ವರ್ಣಿಕರೂಪ್ಪ ಬಿನ್ ಲೇಟ್‌ಸಾಬಾಸ್ಟೀನ್ ಶುಗರ್ ಫಾರಂ ಎಂ.ಸಿ.ಹಳ್ಳಿ, ತರಿಕೆರೆ.

ಪ್ರತಿವಾದಿಗಳು:

1) ಎಸ್.ಆರ್. ರಾಜೇಂದ್ರ ಬಿನ್ ಆರ್.ಎಸ್. ರಮೇಶ್‌ರಾವ್ ಎಕ್ಸೈಜ್ ಕಂಟ್ರಾಕ್ಟರ್, ಜಂಬಣ್ಣ ಆಯಲ್ ಮಿಲ್ ಕಾಂಪೌಂಡ್, ಹೊಸಮನೆ ಎಕ್ಸಟೆನ್ಷನ್, ಶಿವಮೊಗ್ಗ.

2) ದಿ ನ್ಯೂ ಇಂಡಿಯಾ ಅಶೂರೆನ್ಸ್ ಕಂ. ಮಲ್ಲಪ್ಪ ಕಾಂಪ್ಲೆಕ್ಸ್, ಬಿ.ಹೆಚ್.ರಸ್ತೆ, ಶಿವಮೊಗ್ಗ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಜೋಸೆಫ್ ಅಲಿಯಾಸ್ ಕುಬ್ಬೆ ರವರು ಪ್ರತಿವಾದಿಯವರಲ್ಲಿ ಚಾಲಕರಾಗಿ ಕೆಲಸದ ಮೇಲೆ ಇದ್ದಾಗ 30.05.2005 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 1.07.2005 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ, ಅಥವಾ ಅರ್ಜಿಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್.1070 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## GOVERNMENT OF KARNATAKA
## DIRECTORATE OF ECONOMICS AND STATISTICS, BANGALORE-1
## CONSUMER PRICE INDEX NUMBERS FOR INDUSTRIAL WORKERS

No. DES 23 PWX 2005
State: Karnataka

Base: 1987-88=100

Month: May 2005
Date : 25-07-2005

| Group/Sub-Group | Bell-ary | Bha-dra-vathi | Da-van-gere | Dan-deli | Gul-ba-rga | Hari-har | Has-san | Man-dya | Man-ga-lore | My-sore | Rai-chur | Tum-kur |
|---|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| I. **FOOD:** | | | | | | | | | | | | |
| (a) Cereals & Products | 339 | 408 | 374 | 328 | 339 | 340 | 326 | 349 | 284 | 376 | 320 | 372 |
| (b) Pulses & Products | 249 | 306 | 319 | 330 | 281 | 276 | 307 | 312 | 300 | 313 | 262 | 338 |
| (c) Oils & Fats | 244 | 278 | 248 | 253 | 266 | 245 | 252 | 252 | 248 | 255 | 253 | 268 |
| (d) Meat, Fish & Eggs | 344 | 401 | 365 | 454 | 377 | 340 | 335 | 375 | 533 | 385 | 400 | 374 |
| (e) Milk & Products | 343 | 263 | 318 | 323 | 306 | 267 | 251 | 342 | 289 | 257 | 307 | 281 |
| (f) Condiments & Spices | 192 | 322 | 312 | 364 | 250 | 275 | 263 | 229 | 237 | 293 | 194 | 340 |
| (g) Vegetables & Fruits | 261 | 354 | 316 | 403 | 280 | 302 | 347 | 400 | 273 | 296 | 189 | 520 |
| (h) Other Food | 300 | 386 | 348 | 351 | 300 | 338 | 332 | 306 | 303 | 297 | 309 | 341 |
| **FOOD GROUP INDEX** | **300** | **359** | **340** | **345** | **308** | **306** | **309** | **333** | **324** | **318** | **296** | **355** |
| II. Pan, Supari, Tobacco & Intoxicants | 310 | 353 | 364 | 335 | 387 | 450 | 346 | 475 | 297 | 323 | 352 | 393 |
| III. Fuel & Light | 312 | 321 | 273 | 457 | 281 | 325 | 344 | 330 | 272 | 310 | 364 | 292 |
| IV. Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V. Clothing, Bedding & Footwear | 255 | 254 | 215 | 373 | 276 | 218 | 345 | 382 | 242 | 292 | 406 | 211 |
| VI. **MISCELLANEOUS:** | | | | | | | | | | | | |
| (a) Medical Care | 585 | 511 | 372 | 291 | 282 | 268 | 385 | 318 | 336 | 295 | 394 | 224 |
| (b) Education, Recreation & Amusement | 341 | 329 | 521 | 210 | 389 | 474 | 317 | 280 | 352 | 400 | 376 | 370 |
| (c) Transport & Communication | 415 | 398 | 332 | 333 | 595 | 352 | 365 | 560 | 422 | 418 | 388 | 383 |
| (d) Personal Care & effects | 256 | 279 | 257 | 277 | 313 | 257 | 272 | 290 | 271 | 310 | 266 | 270 |
| (e) Others | 325 | 347 | 283 | 428 | 297 | 268 | 285 | 286 | 235 | 301 | 406 | 246 |
| Miscellaneous Group | 367 | 342 | 335 | 308 | 349 | 319 | 312 | 302 | 313 | 348 | 356 | 286 |
| **GENERAL INDEX** | **285** | **314** | **294** | **325** | **286** | **280** | **291** | **310** | **289** | **288** | **302** | **281** |
| To convert to Base 1960 Multiply by Linking Factor. | 7.39 | 9.19 | 8.27 | ... | 8.26 | 8.56 | 9.25 | 7.92 | 9.31 | 9.05 | ... | ... |

ಜಂಟಿ ನಿರ್ದೇಶಕರು,
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಬೆಂಗಳೂರು.

**No. 112/1(KTK)/2001-FLS**
**GOVERNMENT OF INDIA**
**MINISTRY OF LABOUR**
**LABOUR BUREAU**
**CONSUMER PRICE INDEX NUMBERS FOR INDUSTRIAL WORKERS**

State: Karnataka (Base: 1982=100) Month: 4th July 2005

| Code | | Centre | Bangalore | Belgaum | Hubli Dharwar | Mercara |
|---|---|---|---|---|---|---|
| 1000 | IA. | **FOOD:** | | | | |
| 1100 | | (a) Cereals & Products | 426 | 545 | 452 | 445 |
| 1200 | | (b) Pulses & Products | 533 | 470 | 512 | 583 |
| 1300 | | (c) Oils & Fats | 392 | 374 | 372 | 426 |
| 1400 | | (d) Meat, Fish & Eggs | 659 | 605 | 627 | 594 |
| 1500 | | (e) Milk & Products | 381 | 529 | 442 | 460 |
| 1600 | | (f) Condiments & Spices | 477 | 555 | 519 | 451 |
| 1700 | | (g) Vegetables & Fruits | 540 | 516 | 657 | 502 |
| 1800 | | (h) Other Food | 788 | 751 | 719 | 784 |
| 1000 | | **FOOD GROUP** | 528 | 568 | 530 | 532 |
| 2000 | I. | Pan, Supari, Tobacco & Intoxicants | 664 | 599 | 586 | 535 |
| 3000 | II. | Fuel & Light | 821 | 682 | 592 | 458 |
| 4000 | III. | Housing Index | 609 | 770 | 632 | 200 |
| 5000 | IV. | Clothing, Bedding & Footwear | 294 | 287 | 323 | 434 |
| 6000 | V. | **Miscellaneous:** | | | | |
| 6100 | | (a) Medical Care | 490 | 525 | 468 | 343 |
| 6200 | | (b) Education, Recreation & Amusement | 480 | 729 | 589 | 612 |
| 6300 | | (c) Transport & Communication | 665 | 453 | 660 | 646 |
| 6400 | | (d) Personal Care & effects | 493 | 483 | 516 | 454 |
| 6500 | | (e) Others | 523 | 595 | 460 | 482 |
| 6600 | | Miscellaneous Group | 528 | 547 | 519 | 499 |
| | | **GENERAL INDEX** | **527** | **579** | **538** | **495** |

ಜಂಟಿ ನಿರ್ದೇಶಕರು,
ಪಿ.ಆರ್. 1071 ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ನಡವಳಿಗಳು ಬೆಂಗಳೂರು

**ವಿಷಯ :** ಶ್ರೀಮತಿ ಕೆ.ಸಿ. ಯಶವಂತಿ, ಕಿ.ಮ.ಅ. ಸಹಾಯಕಿ, ಪ್ರಾ.ಆ.ಕೇಂದ್ರ, ಸಿದ್ದಾಪುರ, ಇವರ ಅನಧಿಕೃತ ಗೈರುಹಾಜರಿ ಬಗ್ಗೆ.

**ಓದಲಾಗಿದೆ :**
1) ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ: ಡಿಪಿಎನ್(8)ಸಿಆರ್:83:01-02, ದಿನಾಂಕ: 03.10.2002.
2) ನೌಕರರ ಲಿಖಿತ ಅಹವಾಲು ಪತ್ರ ಇಲ್ಲ.
3) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್(8)ಸಿಆರ್:83:01-02, ದಿನಾಂಕ: 24.1.2003.
4) ವಿಚಾರಣಾ ವರದಿಯ ನಂ:ವಿಆ:ವಿಚಾರಣೆ:ಎನ್‌ಜಿ:212:02-03, ದಿನಾಂಕ: 21.11.2003.
5) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್(8)ಸಿಆರ್:83:01-02, ದಿನಾಂಕ: 16.12.2003.
6) ನೌಕರರ ಲಿಖಿತ ಅಹವಾಲು ಪತ್ರ ಸಲ್ಲಿಸಿಲ್ಲ.
7) ಪತ್ರಿಕಾ ಪ್ರಕಟಣೆ ನೀಡಿದ ಸಂಖ್ಯೆ: ಡಿಪಿಎನ್(12)ಸಿಆರ್:08:02-03, ದಿನಾಂಕ: 8.6.2005. (ವಿಜಯ ಕರ್ನಾಟಕ)

**ಪ್ರಸ್ತಾವನೆ:**

ಶ್ರೀಮತಿ ಕೆ.ಸಿ. ಯಶಂವತಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಇವರು ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಸಿದ್ದಾಪುರ, ಉಡುಪಿ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ: 28.3.95 ರಿಂದ ಇಲ್ಲಿಯವರೆವಿಗೂ ಅನಧಿಕೃತ ಗೈರುಹಾಜರಿ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2) ರಲ್ಲಿನ ಪತ್ರದಲ್ಲಿ ಸಲ್ಲಿಸಿದ ಲಿಖಿತ ಅಹವಾಲನ್ನು ಸಲ್ಲಿಸಿದ್ದ ಕಾರಣ, ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3) ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತ ಅಧಿಕಾರಿಗಳು, ಜಾಗೃತಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದು ಮೇಲೆ ಓದಲಾದ (4) ರಂತೆ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ವರದಿಯನ್ನು

ಸಲ್ಲಿಸಿರುತ್ತಾರೆ. ಮೇಲೆ ಓದಲಾದ (5) ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ನೌಕರರಿಗೆ ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (6) ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಪುನಃ ಸಲ್ಲಿಸದಿದ್ದ ಕಾರಣ, ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಪತ್ರಿಕಾ ಪ್ರಕಟಣೆ ಮೂಲಕ ಸಂಖ್ಯೆ: ಡಿಪಿಎನ್(12)ಸಿಆರ್:08:05-06, ದಿನಾಂಕ: 8.6.05 ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಣೆ ಮಾಡಲಾಗಿದ್ದರೂ ನೌಕರರು ಕರ್ತವ್ಯಕ್ಕೆ ಹಾಜರಾಗದೆ ಲಿಖಿತ ಹೇಳಿಕೆಯನ್ನು ಸಲ್ಲಿಸದೆ ಇರುವುದರಿಂದ, ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(8)ಸಿಆರ್:83:2001-02, ಬೆಂಗಳೂರು, ದಿನಾಂಕ: 19ನೇ ಜುಲೈ 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಮೊಹಮ್ಮದ್ ಸನಾವುಲ್ಲ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀಮತಿ ಕೆ.ಸಿ.ಯಶವಂತಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಸಿದ್ದಾಪುರ, ಉಡುಪಿ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ: 28.3.95 ರಿಂದ ಇಲ್ಲಿಯವರೆವಿಗೂ ಅನಧಿಕೃತ ಗೈರುಹಾಜರಿಯಾಗಿರುವುದರಿಂದ, ಕೆ.ಸಿ.ಎಸ್. (ಸಿಸಿಎ) ನಿಯಮ 8(viii)ರ ಪ್ರಕಾರ ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದ್ದೇನೆ.

**ಮೊಹಮ್ಮದ್ ಸನಾವುಲ್ಲ**
ಆಯುಕ್ತರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

ಪಿ.ಆರ್. 1072

**FORM No.155**
**(See Rule 329)**
**Members' Voluntary Winding-up**
**Name of the Company: MAHABALESHWARA SERVICES AND AGENCIES PRIVATE LIMITED**
**NOTICE CONVENING FINAL MEETING**

NOTICE is hereby given in pursuance of Section 497 of the Companies Act 1956, that a General Meeting of the Members of the above named Company will be held at No.801, classique Apts., Bunts' Hostel Road, Mangalore-575 003, on Thursday, the 29th September 2005, at 4.00 P.M. for the purpose of having an account laid before them showing the manner in which the winding-up has been conducted and the property of Company disposed of, and of hearing any explanation that may be given by the Liquidator and also of determining by a Special Resolution of the Company, the manner in which the books of accounts and documents of the Company, and of the Liquidator shall be disposed.

Dated this the 12th day of August, 2005.

**K.C. NAIK**
Liquidator.

P.D. 66

**KARNATAKA POWER TRANSMISSION CORPORATION LIMITED**
**Office of the Executive Engineer Elecl., Major Works Division, KPTCL, N.R. Mohalla, Mysore-7**
**DRAFT NOTIFICATION**
**No: EEE/AEE (O)/MWD/MYS/2005-06/1977-81, Dated: 27th June 2005**

Karnataka Power Transmission Corporation Limited has formulated a scheme under section 28 and clause (e) of section 18 of the Electricity supply Act 1948 and the scheme is herewith published in pursuance of section 29(2) of the said Act, this notification is issued for information of the license holders and any other concerned persons. Particulars of the scheme are as hereunder:

| | |
|---|---|
| Name of the Work | Construction of Proposed 66KV tap line from existing 66KV SC Gundlupet-Bommalapura line to proposed 66/11KV S/S at Hangala in Gundlupet Taluk, Chamarajanagar District. |
| Salient Features and | To Improve Voltage condition & to meet future Load growth of Hangala & its Surrounding areas. |
| Areas Passing through | Shivapura, Bendravadihundi, Hangalapura & Hangala Limits. |
| Approximate length of the line | 6.00 Km. |
| Approximate Cost | 54.00 Lakhs. |

KPTCL shall have and exercise all powers which the telegraph authorities possess under part-III of the Indian Telegraph Act 1985 (13 of 1985) for implementation of the above said scheme. Any objections regarding the above scheme shall be sent to the Executive Engineer Elecl., Major works Division, KPTCL, Mysore-7 within two months from the date of Publication of this notification for KPTCL's, pursuance.

Executive Engineer Elecl.,
KPTCL, M.W. Division, Mysore.

P.D. 65